KA / BG-GPO/2515/WPP-47/2006-2008

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೧ | ಬೆಂಗಳೂರು, ಗುರುವಾರ, ಫೆಬ್ರುವರಿ ೦೨, ೨೦೦೬ (ಮಾಘ ೧೩., ಶಕ ವರ್ಷ ೧೯೨೭) | ಸಂಚಿಕೆ ೫

## ಭಾಗ - ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ವಿಶೇಷ ಭೂಸ್ವಾಧೀನಾಧಿಕಾರಿಗಳ ಕಾರ್ಯಾಲಯ, ಕೊಟ್ಟೂರು - ಹರಿಹರ ರೈಲ್ವೆ ಬ್ರಾಡ್‌ಗೇಜ್ ಲೈನ್ ನಿರ್ಮಾಣ, ಹರಪನಹಳ್ಳಿ,**

**ಕರ್ನಾಟಕ ಭೂಸ್ವಾಧೀನ ಕಾಯ್ದೆ 1894ರ ಕಲಂ 17(4) ರಡಿ (ಕಲಂ 16(2)ರಲ್ಲಿ ಓದಲಾದಂತೆ) ಅಧಿಸೂಚನೆ**

**ನಂ. ಕಂ.ವಿಭೂಸ್ವಾ / ಕೊಹರೈಲ್ವೆ / ಸಿಆರ್ / 24 / 02-03, ದಿನಾಂಕ: 5ನೇ ಜನವರಿ 2006**

ಕರ್ನಾಟಕ ಸರ್ಕಾರದವರು 1961ನೇ ಸಾಲಿನ ಕರ್ನಾಟಕ ಅಧಿನಿಯಮ ಕ್ರಮ ಸಂಖ್ಯೆ 16 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣಾ ಅಧಿನಿಯಮದ (1894ರ ಸಾಲಿನ ಕೇಂದ್ರ ಅಧಿನಿಯಮ 1ರ ಪ್ರಕರಣ 16(2)ರ ಮೇರೆಗೆ ಈ ಮೂಲಕ ಅನುಸೂಚಿಯಡಿ ಸೂಚಿಸಲಾದ ಜಮೀನುಗಳನ್ನು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಕೊಟ್ಟೂರು - ಹರಿಹರ ರೈಲ್ವೆ ಬ್ರಾಡ್‌ಗೇಜ್ ಲೈನ್ ನಿರ್ಮಾಣಕ್ಕಾಗಿ ಅಧಿಕೃತವಾಗಿ ಸದರಿ ಭೂಸ್ವಾಧೀನ ಅಧಿನಿಯಮದ ಪ್ರಕರಣ 16(1) ರಂತೆ ವಶಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಪ್ರಕಟಿಸಲಾಗಿದೆ. ಹಾಗೂ ನೈರುತ್ಯ ರೈಲ್ವೆ ಇಲಾಖೆ ಪರವಾಗಿ ಭೂಸ್ವಾಧೀನ ಪಡಿಸಲಾಗಿದೆ.

**ಅನುಸೂಚಿ**

**ಜಿಲ್ಲೆ:** ದಾವಣಗೆರೆ  **ತಾಲ್ಲೂಕು:** ಹರಪನಹಳ್ಳಿ  **ಹೋಬಳಿ:** ಕಸಬಾ  **ಗ್ರಾಮ:** ಹರಪನಹಳ್ಳಿ

| ಕ್ರ.ಸಂ. | ಸರ್ವೆ ನಂ. | ತರಹೆ | ವಿಸ್ತೀರ್ಣ ಎಕರೆ-ಸೆಂಟ್ಸ್ | ಆಕಾರ ರೂ. ಪೈ | ವಶಪಡಿಸಿಕೊಂಡ ದಿನಾಂಕ |
|---|---|---|---|---|---|
| 1 | 2 | 3 | 4 | 5 | 6 |
| 1 | 382 | ಖುಷ್ಕಿ | 1-33 | 0-60 | 18.1.2005 |
| | ಒಟ್ಟು | | 1-33 | 0-60 | |

**ಬಿ.ಎಸ್. ಪುರುಷೋತ್ತಮ**
ವಿಶೇಷ ಭೂಸ್ವಾಧೀನಾಧಿಕಾರಿ (ಪ್ರಭಾರ),
ಕೊಟ್ಟೂರು-ಹರಿಹರ ರೈಲ್ವೆ ಬ್ರಾಡ್‌ಗೇಜ್
ಲೈನ್ ನಿರ್ಮಾಣ, ಹರಪನಹಳ್ಳಿ.

ಪಿ.ಆರ್. 28

## ಕಂದಾಯ ಸಚಿವಾಲಯ

### ಭೂ ಸ್ವಾಧೀನ ಕಾಯಿದೆ ಕಲಂ 6(1) ರ ಅನ್ವಯ ಘೋಷಣೆ

### ಕ್ರಮಾಂಕ ಕಂಇ 10 ಭೂಸ್ವಾಚ 2005, ದಿನಾಂಕ: 18ನೇ ಜನವರಿ 2006

ಈ ಮುಂದಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಜಮೀನು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ವಿದ್ಯುತ್ ಉಪ ಕೇಂದ್ರ ವಿಸ್ತರಣೆ ಮಾಡಲು, ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆಯವರ ಕ್ರಮಾಂಕ ಎಲ್.ಎ.ಕ್ಯೂ: ಸಿಆರ್ : 165 : 2002-03 ದಿನಾಂಕ 15.5.2004 ರ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ.

ಕರ್ನಾಟಕ ಸರ್ಕಾರದವರು 1991 ನೇ ಸಾಲಿನ ಕರ್ನಾಟಕ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಕೇಂದ್ರ ಅಧಿನಿಯಮ (1)5ಎ ಪ್ರಕರಣ, ಉಪ ಪ್ರಕರಣ (2) ಮತ್ತು 6(1ಎ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳವರ ವರದಿಯನ್ನು ಪರಿಶೀಲಿಸಿದ ನಂತರ ಮೇಲೆ ಹೇಳಿದ ಉದ್ದೇಶಕ್ಕಾಗಿ ಭೂ ಸ್ವಾಧೀನಪಡಿಸಿಕೊಳ್ಳುವುದು ಅವಶ್ಯವೆಂದು ಪರಿಗಣಿಸಿದ್ದಾರೆ. ಸದರಿ ಭೂ ಸ್ವಾಧೀನ ಅಧಿನಿಯಮ 6ನೇ ಪ್ರಕರಣದ ಮೇರೆಗೆ ಸದರಿ ಜಮೀನು ಮೇಲಿನ ಉದ್ದೇಶಕ್ಕಾಗಿ ಬೇಕಾಗಿರುವುದರಿಂದ, ಈ ಮೂಲಕ ಘೋಷಿಸಲಾಗಿದೆ.

ಸದರಿ ಭೂ ಸ್ವಾಧೀನ ಅಧಿನಿಯಮ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಉಪ ವಿಭಾಗಾಧಿಕಾರಿಗಳು ಹಾಗೂ ಭೂ ಸ್ವಾಧೀನಾಧಿಕಾರಿಗಳು, ಹರಪನಹಳ್ಳಿ ಉಪ ವಿಭಾಗ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ ಇವರನ್ನು ಸದರಿ ಜಮೀನಿನ ಸಂಬಂಧದಲ್ಲಿ ಮುಂದಿನ ಎಲ್ಲ ನಡವಳಿಕೆಗಳನ್ನು ಕೈಗೊಳ್ಳಲು ಜಿಲ್ಲಾಧಿಕಾರಿಗಳವರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸುವಂತೆ ಈ ಮೂಲಕ ನಿಯಮಿಸಲಾಗಿದೆ ಮತ್ತು ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ಆದೇಶಗಳನ್ನು ಪಡೆಯುವಂತೆ ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶಿಸಲಾಗಿದೆ.

ಸದರಿ ಜಮೀನಿನ ನಕ್ಷೆಯನ್ನು ಉಪ ವಿಭಾಗಾಧಿಕಾರಿಗಳು ಹಾಗೂ ಭೂ ಸ್ವಾಧೀನಾಧಿಕಾರಿಗಳು, ಹರಪನಹಳ್ಳಿ ಉಪ ವಿಭಾಗ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ದಾವಣಗೆರೆ **ತಾಲ್ಲೂಕು:** ಹರಪನಹಳ್ಳಿ **ಹೋಬಳಿ:** ತೆಲಗಿ **ಗ್ರಾಮ:** ತೆಲಗಿ

| ಕ್ರ.ಸಂ. | ಖಾತೆದಾರರ ಅನುಭವದಾರರ ಗೇಣಿದಾರರ ಹಿತಾಸಕ್ತಿ ಹೊಂದಿರುವವರ ಹೆಸರು | ತರಹೆ | ಸರ್ವೆ ನಂಬರ್ | ಚಕ್ಕುಬಂದಿ | | | | ಭೂ ಸ್ವಾಧೀನಕ್ಕೆ ಅಗತ್ಯವಾದ ಅಂದಾಜು ವಿಸ್ತೀರ್ಣ ಎ.ಸೆಂ. | ಆಕಾರ ರೂ.ಪೈ. |
|---|---|---|---|---|---|---|---|---|---|
| | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | | |
| 1 | 2 | 3 | 4 | 5 | 6 | 7 | 8 | 9 | 10 |
| 1 | ಜಿ. ಉಜ್ಜಪ್ಪ ಬಿನ್ ಚನ್ನಬಸಪ್ಪ, ಕೆ.ಜಿ. ರೇವಣಸಿದ್ದಪ್ಪ ಬಿನ್ ಸಿದ್ದಪ್ಪ (ಜಂಟಿ) | ಖುಷ್ಕಿ | 321/ ಎಫ್ | ಕೆಪಿಟಿಸಿಎಲ್ ಕಛೇರಿ ಭಾಗ. | ಸ.ನಂ. 321/ ಎಫ್ ಪೈಕಿ ಉಳಿದ ಜಮೀನು | ಸ.ನಂ. 321/ ಎಫ್ ಪೈಕಿ ಉಳಿದ ಜಮೀನು | ಸ.ನಂ. 321/ ಎಫ್ ಪೈಕಿ ಉಳಿದ ಜಮೀನು | 0.35 | 0.50 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 26

**ಎಂ. ವೆಂಕಟೇಶಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸ್ವಾ).

**ಕಂದಾಯ ಸಚಿವಾಲಯ**

**ಭೂ ಸ್ವಾಧೀನ ಕಾಯ್ದೆ ಕಲಂ 6(1) ರ ಅನ್ವಯ ಘೋಷಣೆ**

**ಸಂಖ್ಯೆ: ಕಂಇ 34 ಭೂಸ್ವಾಬೆ 05, ದಿನಾಂಕ: 26ನೇ ಡಿಸೆಂಬರ್ 2005 -**

ಈ ಮುಂದಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಜಮೀನುಗಳನ್ನು ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ನಂ. 97, ರಹಮತ್‌ನಗರ, 5ನೇ ಅಡ್ಡರಸ್ತೆ ಸ್ವತ್ತಿನ ಸಂಖ್ಯೆ 21 ರಲ್ಲೆ 15 x 30 ಮತ್ತು 15 x 40 ರ ವಿಸ್ತರಣೆ 1050 ಚದರ ಅಡಿ ಪ್ರದೇಶವನ್ನು ರಸ್ತೆಗಾಗಿ ಭೂ ಸ್ವಾಧೀನಪಡಿಸಿಕೊಳ್ಳಬೇಕಾಗಬಹುದೆಂದು ಬೆಂಗಳೂರು ವಿಶೇಷ ಜಿಲ್ಲಾಧಿಕಾರಿಗಳು, ಕ್ರಮಾಂಕ ಎಲ್‌ಎಕ್ಯೂ ಎಸ್‌ಆರ್ 8 : 04-05, ದಿನಾಂಕ: 10.11.04 ರಲ್ಲಿ ಹಾಗೂ ಕರ್ನಾಟಕ ರಾಜ್ಯಪತ್ರದ ದಿನಾಂಕ 16.12.04 ಪ್ರಕಟಿಸಲಾಗಿರುವ ಕಾಯ್ದೆ ಕಲಂ 4(1) ರ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ.

ಕರ್ನಾಟಕ ಸರ್ಕಾರದ 1961 ನೇ ಸಾಲಿನ ಕರ್ನಾಟಕ ಅಧಿನಿಯಮ 17 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣಾ ಅಧಿನಿಯಮ 5ಎ(2)ರ ಪ್ರಕರಣ ಮತ್ತು 6(ಅ) ಪ್ರಕರಣದ ಮೇರೆಗೆ ವಿಶೇಷ ಜಿಲ್ಲಾಧಿಕಾರಿಯವರು ಮೇಲೆ ಹೇಳಿದ ಉದ್ದೇಶಕ್ಕಾಗಿ ಸದರಿ ಜಮೀನನ್ನು ಭೂ ಸ್ವಾಧೀನ ಪಡಿಸಿಕೊಳ್ಳುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಸದರಿ ಭೂ ಸಂಗ್ರಹಣಾ ಅಧಿನಿಯಮ 6ನೇ ಪ್ರಕರಣದ ಮೇರೆಗೆ ಸದರಿ ಜಮೀನುಗಳು ಮೇಲಿನ ಉದ್ದೇಶಕ್ಕಾಗಿ ಬೇಕಾಗಬಹುದೆಂದು ಈ ಮೂಲಕ ಘೋಷಿಸಲಾಗಿದೆ.

ಸದರಿ ಭೂ ಸಂಗ್ರಹಣಾ ಅಧಿನಿಯಮ 3ನೇ ಪ್ರಕರಣ (ಸಿ) ಖಂಡದ ಮೇರೆಗೆ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, 3ನೇ ಮಹಡಿ, ಪೋಡಿಯಂ ಬ್ಲಾಕ್, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು-1 ಇವರನ್ನು ಸದರಿ ಜಮೀನುಗಳ ಬಗ್ಗೆ ಮುಂದಿನ ಎಲ್ಲಾ ಕಾನೂನು ಕ್ರಮಗಳನ್ನು ಕೈಗೊಳ್ಳಲು ಜಿಲ್ಲಾಧಿಕಾರಿಗಳವರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ಈ ಮೂಲಕ ನಿಯಮಿಸಲಾಗಿದೆ. ಮತ್ತು ಸದರಿ ಜಮೀನಿನ ಅಧಿಕೃತ ಸಂಗ್ರಹಣ ಆದೇಶಗಳನ್ನು ಪಡೆಯುವಂತೆ ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶಿಸಲಾಗಿದೆ.

ಸದರಿ ಜಮೀನುಗಳ ನಕ್ಷೆಯನ್ನು ವಿಶೇಷ ಭೂ ಸ್ವಾಧೀನಾಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, 3ನೇ ಮಹಡಿ, ಪೋಡಿಯಂ ಬ್ಲಾಕ್, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು-1 ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ನಂ. 97 ರಹಮತ್‌ನಗರ**

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ್ವತ್ತಿನ ಸಂಖ್ಯೆ | ತರಹೆ | ಚಕ್ಕುಬಂದಿ | | | | ಬೇಕಾದ ಜಮೀನಿನ ವಿವರ | |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ | ಆಕಾರ |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಮಹಮದ್‌ಗೌಸ್ ಮೊಹಿದ್ದೀನ್ | - | 21 | - | ರಸ್ತೆ | ಖಾಸಗಿ ಸ್ವತ್ತು | ಮಹಮದ್ ಹುಸೇನ್ | ರಸ್ತೆ | 15 x 40 600 ಚ ಅಡಿ | |
| 2 | ಮಹಮದ್ ಹುಸೇನ್ | - | 21 | - | ರಸ್ತೆ | ಖಾಸಗಿ ಸ್ವತ್ತು | ರಸ್ತೆ | ಮಹಮದ್ ಹುಸೇನ್ | 15 x 30 450 ಚ ಅಡಿ | |

ಪಿ.ಆರ್. 27

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟೇಶಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸ್ವಾ-2).

**ಕಂದಾಯ ಸಚಿವಾಲಯ**

**ಭೂ ಸ್ವಾಧೀನ ಕಾಯ್ದೆ ಕಲಂ 6(1)ರ ಅಧಿಸೂಚನೆ**

**ಕ್ರಮಾಂಕ : ಆರ್‌ಡಿ 136 ಭೂಸ್ವಾಬೆ 2005, ದಿನಾಂಕ: 31ನೇ ಡಿಸೆಂಬರ್ 2005**

ಈ ಮುಂದಿನ ಅಧಿಸೂಚನೆಯಲ್ಲಿ ನಿರ್ಧಿಷ್ಟಪಡಿಸಿರುವ ಜಮೀನುಗಳು ಒಂದು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಬೆಂಗಳೂರು - ಹಾಸನ ಹೊಸ ಬ್ರಾಡ್‌ಗೇಜ್ ಲೈನ್ ನಿರ್ಮಾಣಕ್ಕಾಗಿ ರೈಲ್ವೆ ಇಲಾಖೆ, ಬೆಂಗಳೂರು ಪರ ಭೂ ಸ್ವಾಧೀನಪಡಿಸಿಕೊಳ್ಳುವುದು ಅಗತ್ಯವಾಗಿದೆಯೆಂದು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ನಂ: ಎಲ್‌ಎಕ್ಯೂ : ಎಸ್‌ಆರ್ : 7 : 2004-05, ದಿನಾಂಕ: 19.04.2004 ರಂತೆ ಪ್ರಕಟವಾಗಿರುವ ಭೂ ಸ್ವಾಧೀನ ಅಧಿನಿಯಮದ ಪ್ರಕರಣ 17(4) ರಲ್ಲಿ ಓದಲಾದಂತೆ 4(1)ರ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ. ಸದರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರ ಭಾಗ-6, ಪುಟ 1 ರಲ್ಲಿ ದಿನಾಂಕ: 15.12.2004 ರಂದು ಪ್ರಕಟಿಸಿರುತ್ತದೆ.

1991 ನೇ ಸಾಲಿನ ಕರ್ನಾಟಕ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1984ನೇ ಸಾಲಿನ ಭೂ ಸ್ವಾಧೀನ ಅಧಿನಿಯಮ (ಕೇಂದ್ರ ಅಧಿನಿಯಮ) 1894ರ 1(6)ನೇ ಪ್ರಕರಣದ ಮೇರೆಗೆ ಕೆಳಗೆ ಸೂಚಿಸಿರುವ ಜಮೀನುಗಳನ್ನು ಭೂ ಸ್ವಾಧೀನ ಪಡಿಸಿಕೊಳ್ಳಲು ಅಗತ್ಯವಿದೆಯೆಂದು ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಜಮೀನು, ಅಗತ್ಯವಾಗಿದೆಯೆಂದು ಸದರಿ ಅಧಿನಿಯಮದ 6 ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ. ಪ್ರಕರಣ 7ರ ಮತ್ತು 3(ಸಿ) ಪ್ರಕಾರ ಹೊಂದಿರುವ ಅಧಿಕಾರದ ಮೇಲೆ ವಿಶೇಷ ಭೂ ಸ್ವಾಧೀನಾಧಿಕಾರಿಗಳು, 3ನೇ ಮಹಡಿ, ವಿಶ್ವೇಶ್ವರಯ್ಯ ಕೇಂದ್ರ, ಬೆಂಗಳೂರು-01, ಇವರನ್ನು ಇನ್ನು ಮುಂದೆ ಕೈಗೊಳ್ಳುವ ವ್ಯವಹಾರಗಳನ್ನು ಕುರಿತಂತೆ ಜಿಲ್ಲಾಧಿಕಾರಿಗಳವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಿಸಲಾಗಿದೆ. ಮತ್ತು ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ಆದೇಶ ನೀಡಲಾಗಿದೆ.

ಮೇಲ್ಕಂಡ ಅಧಿನಿಯಮದ 17ನೇ ಪ್ರಕರಣದ ಪ್ರಕರಣ (4)ರ ಪ್ರಕರಣದಲ್ಲಿರುವ ಅಧಿಕಾರದ ಮೇಲೆ ಸದರಿ ಅಧಿನಿಯಮದ ಪ್ರಕರಣ 9 ರಲ್ಲಿನ ಪ್ರಕರಣ 10ರ ಪ್ರಕಾರ ಹೊರಡಿಸಲಾಗುವ ತಿಳುವಳಿಕೆಯನ್ನು ಪ್ರಕಟಿಸಿದ ದಿನಾಂಕದಿಂದ 15 ದಿವಸಗಳು ಕಳೆದ ನಂತರ ಸದರಿ ಜಮೀನನ್ನು ಸ್ವಾಧೀನ ಪಡೆಯಲು ನಿರ್ದೇಶಿಸಿರುತ್ತದೆ.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ಪೋಡಿಯಂ ಬ್ಲಾಕ್, 3ನೇ ಮಹಡಿ, ವಿಶ್ವೇಶ್ವರಯ್ಯ ಕೇಂದ್ರ, ಬೆಂಗಳೂರು-01 ಇವರಲ್ಲಿ ಅವಗಾಹನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ಬೆಂಗಳೂರು ನಗರ **ತಾಲ್ಲೂಕು:** ಬೆಂಗಳೂರು ಉತ್ತರ **ಹೋಬಳಿ:** ಹೆಸರುಘಟ್ಟ **ಗ್ರಾಮ:** ಸೋಲದೇವನಹಳ್ಳಿ

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಭೂ ಸ್ವಾಧೀನ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ. ಗು. | ಆಕಾರ ರೂ.ಪೈ |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಚಿಕ್ಕಣ್ಣರೆಡ್ಡಿ ಬಿನ್ ಮುನಿಯಪ್ಪ | ಚಿಕ್ಕಣ್ಣರೆಡ್ಡಿ | 60 | ಖುಷ್ಕಿ | 62:1 | ಗ್ರಾಮಠಾಣ | ರೈಲ್ವೆ ಲೈನ್ | ಉಳಿಕೆ | 0-12 | 0-40 |
| 2 | ಚಿಕ್ಕಣ್ಣ ಬಿನ್ ಮುನಿಯಪ್ಪ<br>ರಂಗ, ಕರಿಯ, ಸಣ್ಣ<br>ಅಶ್ವಥಮ್ಮ ಕೋಂ ಚಿಕ್ಕಣ್ಣರೆಡ್ಡಿ<br>ಸಿದ್ದಗಂಗಯ್ಯ<br>ತಿಮ್ಮಮ್ಮ ವೈಫ್ ಆಫ್ ಲೇಟ್ ಎಲ್.ವಿ. ತಿಮ್ಮಯ್ಯ | ಅಶ್ವಥಮ್ಮ<br>ಸಿದ್ದಗಂಗಯ್ಯ<br>ಚಿಕ್ಕಣ್ಣ<br>ತಿಮ್ಮಮ್ಮ | 62:1 | ,, | 71 | 60 | ರೈಲ್ವೆ ಲೈನ್ | ಉಳಿಕೆ | 0-09 $^{1}/_{4}$ | 0-30 |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 3 | ಶಿವಾಜಿರಾವ್ | ಶಿವಾಜಿರಾವ್ | ಗ್ರಾಮಠಾಣ ಸ್ವತ್ತಿನ ನಂ: 5:1 | ,, | ಗ್ರಾಮಠಾಣ ಸ್ವತ್ತಿನ ನಂ:6 | ರಸ್ತೆ | ರೈಲ್ವೆ ಲೈನ್ | ಉಳಿಕೆ | 0-01 | 2-00 |
| 4 | ಬೈಲಪ್ಪ ಬಿನ್ ಹನುಮೇಗೌಡ | ಬೈಲಪ್ಪ | ಗ್ರಾಮಠಾಣ ಸ್ವತ್ತಿನ ನಂ : 6 | ,, | ಗ್ರಾಮಠಾಣ ಸ್ವತ್ತಿನ ನಂ: 412 | ಗ್ರಾಮಠಾಣ ಸ್ವತ್ತಿನ ನಂ: 5:1 | ರೈಲ್ವೆ ಲೈನ್ | ಉಳಿಕೆ | 0-0 $^{1}/_{2}$ | 1-00 |
| 5 | ಯಲ್ಲಪ್ಪ ಬಿನ್ ಹನುಮಯ್ಯ | ಯಲ್ಲಪ್ಪ | ಗ್ರಾಮಠಾಣ ಸ್ವತ್ತಿನ ನಂ : 4:2 | ,, | ಸ.ನಂ: 60 | ಗ್ರಾಮಠಾಣ ಸ್ವತ್ತಿನ ನಂ: 6 | ರೈಲ್ವೆ ಲೈನ್ | ಉಳಿಕೆ | 0-01 | 2-00 |
| | | | | | | | | ಒಟ್ಟು | 0-23 $^{3}/_{4}$ | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 30

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾ-2).

**ಜಿಲ್ಲಾಧಿಕಾರಿಯವರ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಭೂ ಸ್ವಾಧೀನ ಕಾಯ್ದೆಯ ಕಲಂ 4(1)ರ ಮೇರೆಗೆ ಅಧಿಸೂಚನೆ**

**ಕ್ರಮಾಂಕ : ಆರ್(2) ಎಲ್ಎಕ್ಯೂ : ಎಸ್ಆರ್: 02 / 05-06, ದಿನಾಂಕ: 27ನೇ ಜನವರಿ 2006**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಉಬ್ರಾಣಿ ಮತ್ತು ಅಮೃತಾಪುರ ಏತ ನೀರಾವರಿ ಯೋಜನೆಗಾಗಿ ಪಂಪಿಂಗ್ ಸ್ಟೇಷನ್ ಹಾಗೂ ಇತರೆ ಕಾಮಗಾರಿಗೆ ಭೂ ಸ್ವಾಧೀನ ಪಡಿಸಿಕೊಳ್ಳಲು ಅಗತ್ಯವಾಗಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಕಂಡು ಬಂದಿರುವುದರಿಂದ.

ಕರ್ನಾಟಕ ಅಧಿನಿಯಮ 1981 ರ 33 ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894 (ಕೇಂದ್ರ ಅಧಿನಿಯಮ ಸಂಖ್ಯೆ 1894) ರ 1ರ 4ನೇ ಪ್ರಕರಣದ (1)ನೇ ಉಪ ಪ್ರಕರಣದ ಉಪ ಬಂಧಗಳ ಅನುಸಾರವಾಗಿ ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಈ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ. ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ 4(2) ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ವಿಶೇಷ ಭೂ ಅರ್ಜನೆ ಅಧಿಕಾರಿ, ಇವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರವನ್ನು ನೀಡುತ್ತದೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5ಎ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ವಿಶೇಷ ಭೂ ಸ್ವಾಧೀನಾಧಿಕಾರಿಗಳು, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಇವರನ್ನು ನೇಮಕ ಮಾಡಲಾಗಿದೆ.

ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ಈ ಅಧಿಸೂಚನೆ ಪ್ರಕಟಣೆಗೊಂಡ ದಿನಾಂಕದಿಂದ 30 ದಿನಗಳೊಳಗಾಗಿ ಅಥವಾ ಅದಕ್ಕೆ ಮುಂಚೆ ಕರ್ನಾಟಕ ಅಧಿನಿಯಮದ 1991 ರ 33ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894, 3(ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ವಿಶೇಷ ಭೂ ಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಇವರಿಗೆ ಲಿಖಿತದಲ್ಲಿ ಮನವಿ ಸಲ್ಲಿಸಬಹುದು.

ಸದರಿ ಭೂಮಿಗಳ ಅರ್ಜನೆ ಉದ್ದೇಶಕ್ಕಾಗಿ ಸದರಿ ಭೂಮಿಗಳ ಮೇಲೆ ನಿಯೋಜಿತರಾದ ಯಾವನೇ ಮೋಜಣಿದಾರ ಅಥವಾ ಇತರ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ಸದರಿ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಶಿವಮೊಗ್ಗ ಜಿಲ್ಲಾಧಿಕಾರಿಗಳ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ ವಿಲೆಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು

ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಸದರಿ ಅಧಿನಿಯಮದ 24ನೇ ಪ್ರಕರಣದ ಉಪ ಪ್ರಕರಣದ ಏಳನೇ ಖಂಡದ (ಉಪ ಪ್ರಕರಣದ) ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು.

ವಿಶೇಷ ಭೂ ಸ್ವಾಧೀನಾಧಿಕಾರಿಗಳು, ತುಂಗಾ ಮೇಲ್ದಂಡೆ ಯೋಜನೆ ಶಿವಮೊಗ್ಗ ಇವರ ಕಛೇರಿಯಲ್ಲಿ ಭೂಮಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗೆ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ಶಿವಮೊಗ್ಗ **ತಾಲ್ಲೂಕು:** ಭದ್ರಾವತಿ **ಹೋಬಳಿ:** ಕಸಬಾ **ಗ್ರಾಮ:** ಕೋಡಿಹಳ್ಳಿ

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಅಗತ್ಯವಿರುವ ಜಮೀನಿನ ವಿವರ | |
|---|---|---|---|---|---|---|---|---|---|---|
| | | | | | ಪೂರ್ವಕ್ಕೆ ಸ.ನಂ. | ಪಶ್ಚಿಮಕ್ಕೆ ಸ.ನಂ. | ಉತ್ತರಕ್ಕೆ ಸ.ನಂ. | ದಕ್ಷಿಣಕ್ಕೆ ಸ.ನಂ. | ವಿಸ್ತೀರ್ಣ ಎ. ಗು. | ಆಕಾರ ರೂ.ಪೈ |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಕೆ. ಹಸನ್‌ಮುಖಿ ಕೋಂ ಶಾಂತಮೂರ್ತಿ | ಸ್ವಂತ | 21 | ನಾಲಾ ತರಿ ಖರಾಬು | 20 | ರಸ್ತೆ | 19 | ಗೌರಾಪುರ ಸ.ನಂ. 13 | 0-35<br>0-15 | 1-40 |
| 2 | ಎಂ. ಕಣ್ಣನ್ ಬಿನ್ ಮುನಿಸ್ವಾಮಿ ಮೊದಲಿಯಾರ್ | ಸ್ವಂತ | 22 | ನಾಲಾ ತರಿ ಖರಾಬು | ರಸ್ತೆ | ಭದ್ರ ನದಿ | 23 | ಗೌರಾಪುರ ಸ.ನಂ. 12 | 1-32<br>0-04 | 4-73 |

| | |
|---|---|
| ತರಿ | 2-27 |
| ಖರಾಬು | 0-19 |
| ಒಟ್ಟು | 3-06 |

**ಜಿಲ್ಲೆ:** ಶಿವಮೊಗ್ಗ **ತಾಲ್ಲೂಕು:** ಭದ್ರಾವತಿ **ಹೋಬಳಿ:** ಕೂಡ್ಲಿಗೆರೆ **ಗ್ರಾಮ:** ಗೌರಾಪುರ

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಅಗತ್ಯವಿರುವ ಜಮೀನಿನ ವಿವರ | |
|---|---|---|---|---|---|---|---|---|---|---|
| | | | | | ಪೂರ್ವಕ್ಕೆ ಸ.ನಂ. | ಪಶ್ಚಿಮಕ್ಕೆ ಸ.ನಂ. | ಉತ್ತರಕ್ಕೆ ಸ.ನಂ. | ದಕ್ಷಿಣಕ್ಕೆ ಸ.ನಂ. | ವಿಸ್ತೀರ್ಣ ಎ. ಗು. | ಆಕಾರ ರೂ.ಪೈ |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಎಂ. ಕಣ್ಣನ್ ಬಿನ್ ಮುನಿಸ್ವಾಮಿ ಮೊದಲಿಯಾರ್ | ಸ್ವಂತ | 12 / ಪಿ 3 | ನಾಲಾ ತರಿ | ರಸ್ತೆ | ಭದ್ರಾ ನದಿ | 22 | 12 | 2-08 | 3-36 |
| 2 | ಎಂ. ಶಿವಕುಮಾರ್ ಬಿನ್ ಮುನಿರತ್ನಂ | ಲಿಂಗಮ್ಮ @ ಲಿಂಗಮ್ಮಾಳ್ | 13 / ಪಿ 6 | ನಾಲಾ ತರಿ | 13/1ರ ಉಳಿದ ಜಮೀನು | ರಸ್ತೆ | ಕೋಡೀಹಳ್ಳಿ ಸ.ನಂ. 21 | 13 / 1 | 0-02 | 0-19 |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 3 | ಎಂ. ಶಂಕರ್ ಬಿನ್ ಮುನಿರತ್ನಂ | ಲಿಂಗಮ್ಮ @ ಲಿಂಗಮ್ಮಾಳ್ | 13 / ಪಿ 6 | ನಾಲಾ ತರಿ | 13/1ರ ಉಳಿದ ಜಮೀನು | 13/1ರ ಉಳಿದ ಜಮೀನು | ಕೋಡೀಹಳ್ಳಿ ಸ.ನಂ. 21 | 13 / 1 | 0-02 | 0-19 |
| 4 | ಎಂ. ಮಂಜುನಾಥ್ ಬಿನ್ ಮುನಿರತ್ನಂ | ಲಿಂಗಮ್ಮ @ ಲಿಂಗಮ್ಮಾಳ್ | 13 / ಪಿ 6 | ನಾಲಾ ತರಿ | 20 | ರಸ್ತೆ | ಕೋಡೀಹಳ್ಳಿ ಸ. ನಂ. 21 | 13 / 1 | 0-01 | 0-10 |
| | | | | | | | | ತರಿ | 2-13 | |

| | |
|---|---|
| ಕೋಡಿಹಳ್ಳಿ | 3-06 |
| ಗೌರಾಪುರ | 2-13 |
| ಒಟ್ಟು | 5-19 |

ಒಟ್ಟು ಐದು ಎಕರೆ ಹತ್ತೊಂಬತ್ತು ಗುಂಟೆ ಮಾತ್ರ :

ಜಿಲ್ಲಾಧಿಕಾರಿಗಳು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

ಪಿ.ಆರ್. 31

## ಕಂದಾಯ ಸಚಿವಾಲಯ

## ಭೂ ಸ್ವಾಧೀನ ಕಾಯ್ದೆ ಕಲಂ 17 ರ ಅನ್ವಯ ಕಲಂ 6(1) ರ

## ಅಧಿಸೂಚನೆ

## ಕ್ರಮಾಂಕ : ಆರ್‌ಡಿ 133 ಎಕ್ಯುಬಿ 2005, ದಿನಾಂಕ: 31ನೇ ಡಿಸೆಂಬರ್ 2005

ಕರ್ನಾಟಕ ಸರ್ಕಾರದವರು 1964ನೇ ಸಾಲಿನ ಕರ್ನಾಟಕ ಅಧಿನಿಯಮ 17ನೇ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ ಕೇಂದ್ರ ಕಾಯ್ದೆ 1894 ರ 1 ರ ಅಧಿನಿಯಮದ 6 ರ ಪ್ರಕಾರ ಹೊಂದಿದ ಅಧಿಕಾರದ ಮೇರೆಗೆ ಈ ಮುಂದಿನ ಅನುಸೂಚಿಯಲ್ಲಿ ಸೂಚಿಸಿರುವ ಜಮೀನುಗಳು ಒಂದು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ರಸ್ತೆಗಾಗಿ ರಕ್ಷಣಾ ಇಲಾಖೆಯವರಿಗೆ ಬೇಕಾಗಬಹುದೆಂದು ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಇವರ ಕ್ರಮಾಂಕ ಎಲ್‌ಎಕ್ಯೂ ಎಸ್‌ಆರ್ 16 : 2004-05 ದಿನಾಂಕ 26.3.2005ರ ಪ್ರಕಾರ ಕರ್ನಾಟಕ ರಾಜ್ಯಪತ್ರ ದಿನಾಂಕ 7.4.2005 ರಂದು ಪ್ರಕಟವಾಗಿರುವ ಅಧಿಸೂಚನೆಯಲ್ಲಿ ತಿಳಿಯಪಡಿಸಲಾಗಿದೆ. ಮತ್ತು ಸದರಿ ಜಮೀನನ್ನು ಭೂ ಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವೆಂದು ಪರಿಗಣಿಸಿ ಸದರಿ ಭೂ ಸಂಗ್ರಹಣಾ ಅಧಿನಿಯಮ 17 ರ ಅನ್ವಯ ಕಲಂ 6ನೇ ಪ್ರಕರಣದ ಮೇರೆಗೆ ಸದರಿ ಜಮೀನುಗಳು ಮೇಲಿನ ಉದ್ದೇಶಕ್ಕಾಗಿ ಅಗತ್ಯವಾಗಿ ಬೇಕಾಗಬಹುದೆಂದು ಈ ಮೂಲಕ ಘೋಷಿಸಲಾಗಿದೆ. ಮೇಲಿನ ನಿಯಮ ಕಲಂ 17 ಮತ್ತು ಕಲಂ 3(ಸಿ) ರ ಪ್ರಕಾರ ಹೊಂದಿರುವ ಅಧಿಕಾರದ ಮೇಲೆ ವಿಶೇಷ ಭೂ ಸ್ವಾಧೀನಾಧಿಕಾರಿ, ಪೋಡಿಯಂ ಬ್ಲಾಕ್, 3ನೇ ಮಹಡಿ, ವಿಶ್ವೇಶ್ವರಯ್ಯ ಕೇಂದ್ರ, ಬೆಂಗಳೂರು-1 ಇವರನ್ನು ಸದರಿ ಕಾರ್ಯವನ್ನು ನಿರ್ವಹಿಸಿ ವಿಶೇಷ ಜಿಲ್ಲಾಧಿಕಾರಿಯವರು ಮಾಡುವ ಕೆಲಸವನ್ನು ನಿರ್ವಹಿಸಿ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ಆದೇಶ ಮಾಡಲಾಗಿದೆ. ಕರ್ನಾಟಕ ಸರ್ಕಾರದವರು ಮೇಲ್ಕಂಡ ನಿಯಮದ ಕಲಂ 17 ರ ಉಪ ಕಲಂ (1) ರ ಪ್ರಕಾರದಲ್ಲಿರುವ ಅಧಿಕಾರದ ಮೇಲೆ ಸದರಿ ನಿಯಮ ಕಲಂ 9 ಮತ್ತು 10 ರ ಪ್ರಕಾರ ಹೊರಡಿಸಲಾಗಿರುವ ತಿಳುವಳಿಕೆಯನ್ನು ಪ್ರಚುರಪಡಿಸಿದ ದಿನಾಂಕದಿಂದ 15 ದಿವಸಗಳು ಕಳೆದ ನಂತರ ಸದರಿ ಜಮೀನನ್ನು ಸ್ವಾಧೀನ ಪಡೆಯಲು ನಿರ್ದೇಶಿಸಿರುತ್ತಾರೆ.

ಸದರಿ ಜಮೀನಿನ ಒಂದು ನಕಾಶೆಯನ್ನು ವಿಶೇಷ ಭೂ ಸ್ವಾಧೀನಾಧಿಕಾರಿಗಳವರ ಕಛೇರಿ, ವಿಶ್ವೇಶ್ವರಯ್ಯ ಕೇಂದ್ರ, 3ನೇ ಮಹಡಿ, ಪೋಡಿಯಂ ಬ್ಲಾಕ್, ಬೆಂಗಳೂರು-01 ಇಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ಬೆಂಗಳೂರು **ತಾಲ್ಲೂಕು:** ಬೆಂಗಳೂರು ಪೂರ್ವ **ಹೋಬಳಿ:** ಕೆ.ಆರ್. ಪುರ **ಗ್ರಾಮ:** ಮಹದೇವಪುರ

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ವಿಸ್ತೀರ್ಣ | ತರಹೆ | ಚಕ್ಕುಬಂದಿ | | | | ಭೂ ಸ್ವಾಧೀನಕ್ಕೆ ಬೇಕಾದ | |
|---|---|---|---|---|---|---|---|---|---|---|---|
| | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ | ಆಕಾರ |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1 | ವೆಂಕಟೇಶ್ ಬಿನ್ ಮುನಿಶಾಮಪ್ಪ ಚಿಕ್ಕಗೋವಿಂದಪ್ಪ ಬಿನ್ ಮುನಿಶಾಮಪ್ಪ ಸರ್ಕಾರಕ್ಕೆ, ವೆಂಕಟಮ್ಮ ಡಾಟರ್ ಆಫ್ ಮುನಿಶಾಮಪ್ಪ | ವೆಂಕಟೇಶ್, ಚಿಕ್ಕಗೋವಿಂದಪ್ಪ ಸರ್ಕಾರಕ್ಕೆ ವೆಂಕಟಮ್ಮ | 3 | 3-28 | ಖುಷ್ಕಿ | ಸ.ನಂ. 4 | ಓಣಿ | ಸ.ನಂ. 3 ರ ಉಳಿಕೆ | ಸ.ನಂ. 3 ರ ಉಳಿಕೆ | 0-08 1/2 | - |
| 2 | ತಾಯಮ್ಮ ಕೋಂ ಲೇಟ್ ನಾರಾಯಣಪ್ಪ, ರಾಮಕ್ಕ ಡಾಟರ್ ಆಫ್ ಲೇಟ್ ನಾರಾಯಣಪ್ಪ | - | 4:1 | 0-23 | ,, | ಸ.ನಂ. 4:1ರ ಉಳಿಕೆ | ಸ.ನಂ. 3 | ಸ.ನಂ. 4:1ರ ಉಳಿಕೆ | ಸ.ನಂ. 4:1 ರ ಉಳಿಕೆ | 0-02 1/2 | - |
| 3 | ಕೆ.ಜಿ. ಅಡವೀಶಯ್ಯ ಬಿನ್ ಕೆ.ಎನ್. ಗಂಗಪ್ಪ, ಕೆ.ಜಿ. ನಾಗರಾಜು ಬಿನ್ ಕೆ.ಎನ್. ಗಂಗಪ್ಪ, ಕೆ.ಜಿ. ಶಿವರುದ್ರಯ್ಯ ಬಿನ್ ಕೆ.ಎನ್. ಗಂಗಪ್ಪ, ಗೌರಮ್ಮ ಡಾಟರ್ ಆಫ್ ಕೆ.ಎನ್. ಗಂಗಪ್ಪ | ಕೆ.ಜಿ. ಅಡವೀಶಯ್ಯ ಕೆ.ಜಿ. ನಾಗರಾಜು ಕೆ.ಜಿ. ಶಿವರುದ್ರಯ್ಯ ಗೌರಮ್ಮ | 152 | 6-17 | ,, | ಓಣಿ | ಸ.ನಂ. 153 | ಸ.ನಂ. 152 ಉಳಿಕೆ | ಸ.ನಂ. 152 ರ ಉಳಿಕೆ | 0-17 | - |
| 4 | ಕೆ.ಜಿ. ಬಸವರಾಜು ಬಿನ್ ಕೆ.ಎನ್. ಗಂಗಪ್ಪ, ಕೆ.ಜಿ. ಅಡವೀಶಯ್ಯ ಬಿನ್ ಕೆ.ಎನ್. ಗಂಗಪ್ಪ, ಗೌರಮ್ಮ ಡಾಟರ್ ಆಫ್ ಕೆ.ಎನ್. ಗಂಗಪ್ಪ | ಬಸವರಾಜು ಅಡವೀಶಯ್ಯ ಗೌರಮ್ಮ | 153 | 4-11 | ,, | ಸ.ನಂ. 152 | ಸ.ನಂ. 158 | ಸ.ನಂ. 153 ರ ಉಳಿಕೆ | ಸ.ನಂ. 153 ರ ಉಳಿಕೆ | 0-11 | - |
| 5 | ಅಕ್ಕಮ್ಮ ಕೋಂ ಕೆಂಪಣ್ಣ | ಅಕ್ಕಮ್ಮ | 158 | 5-18 | ,, | ಸ.ನಂ. 153 | ಸ.ನಂ. 159 | ಸ.ನಂ. 158 | ಸ.ನಂ. 158 | 0-24 | - |
| 6 | ಪಿ. ಮುನಿನಾರಾಯಣಪ್ಪ, ನಂಜುಂಡರೆಡ್ಡಿ ಉ: ಮುನಿಯಪ್ಪ ರೆಡ್ಡಿ ಬಿನ್ ಗುರೆಡ್ಡಿ | ಪಿ. ಮುನಿನಾರಾಯಣಪ್ಪ ನಂಜುಂಡರೆಡ್ಡಿ | 159 | 3-37 | ,, | ಸ.ನಂ. 158 | ಸ.ನಂ. 160 | ಸ.ನಂ. 159 ರ ಉಳಿಕೆ | ಸ.ನಂ. 159 ರ ಉಳಿಕೆ | 0-11 | - |
| 7 | ತಿಮ್ಮಯ್ಯ ಉ: ಗುಡ್ಡೆತಿಮ್ಮಯ್ಯ | ತಿಮ್ಮಯ್ಯ | 160:2 | 2-07 | ಖುಷ್ಕಿ | ಸ.ನಂ. 159 | ಸ.ನಂ. 161 | ಸ.ನಂ. 160:2 | ಸ.ನಂ. 160:2 | 0-07 | - |
| 8 | ವಿಜಯಲಕ್ಷ್ಮಿ ಕೋಂ ಲೇಟ್ ಬಿ.ಆರ್. ರಂಗನಾಥಭಟ್ | ವಿಜಯಲಕ್ಷ್ಮಿ | 161 | 3-34 | ,, | ಸ.ನಂ. 160 | ಸ.ನಂ. 162 | ಸ.ನಂ. 161 ರ ಉಳಿಕೆ | ಸ.ನಂ. 161 ರ ಉಳಿಕೆ | 0-20 | - |
| | | | | | | | | | ಒಟ್ಟು | 2-21 | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 29

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾ-2).